

# ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರ ಹೆಸರು : ಶ್ರೀ ಎನ್. ಅಪ್ಪಾಜಿ ಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 1493

ಉತ್ತರಿಸಬೇಕಾದ ದಿನಾಂಕ : 17.03.2021.

ಉತ್ತರಿಸಬೇಕಾದ ಸಚಿವರು : ಮಾನ್ಯ ಪಶುಸಂಗೋಪನೆ ಸಚಿವರು.

| ಕ್ರ.ಸಂ | | ಉತ್ತರಗಳು |
|---|---|---|
| ಅ | ಇತ್ತೀಚೆಗೆ ರಾಜ್ಯದಲ್ಲಿ ಜಾನುವಾರುಗಳಿಗೆ ನೀಡಲಾಗುತ್ತಿರುವ ಲಸಿಕೆಗಳು ನಕಲಿಯಿಂದ ಕೂಡಿದ್ದು, ಇದರಿಂದಾಗಿ ಜಾನುವಾರುಗಳು ಮೃತಪಟ್ಟ ವರದಿಗಳು ಸರ್ಕಾರದ ಗಮನಕ್ಕೆ ಬಂದಿದೆಯೇ: | ಇತ್ತೀಚೆಗೆ ರಾಜ್ಯದಲ್ಲಿ ಜಾನುವಾರುಗಳಿಗೆ ರಾಷ್ಟ್ರೀಯ ಜಾನುವಾರು ರೋಗ ನಿಯಂತ್ರಣ ಕಾರ್ಯಕ್ರಮ (National Animal Disease Control Program- (NADCP) ದಡಿಯಲ್ಲಿ ನೀಡಲಾದ ಮೊದಲನೇ ಸುತ್ತಿನ ಕಾಲು ಬಾಯಿ ರೋಗ ಲಸಿಕೆಯು ಲಸಿಕಾ ಗುಣಮಟ್ಟ ಪರೀಕ್ಷೆಯಲ್ಲಿ ಪೂರಕ ಗುಣಮಟ್ಟವನ್ನು ಹೊಂದಿಲ್ಲವೆಂದು (Sub Standard Vaccine) ಕೇಂದ್ರ ಸರ್ಕಾರದಿಂದ ವರದಿ ಬಂದಿರುತ್ತದೆ.<br>ಸದರಿ ಸುತ್ತಿನ ಕಾಲು ಬಾಯಿ ರೋಗ ಲಸಿಕಾ ಕಾರ್ಯಕ್ರಮದ ಅವಧಿಯಲ್ಲಿ ರಾಜ್ಯದಲ್ಲಿ 9769317 ಜಾನುವಾರುಗಳಿಗೆ ಲಸಿಕೆ ಹಾಕಲಾಗಿದ್ದು, ಸಾಮಾನ್ಯವಾಗಿ ಪ್ರತಿ ಸುತ್ತಿನಲ್ಲಿ ವ್ಯತಿರಿಕ್ತ ಪರಿಣಾಮ ಸಂಭವಿಸುವಂತೆ ಈ ಸುತ್ತಿನಲ್ಲಿಯೂ ಸಹ 108 ಲಸಿಕಾ ವ್ಯತಿರಿಕ್ತ ಪರಿಣಾಮಗಳು ಉಂಟಾಗಿದ್ದು, ಇವುಗಳಲ್ಲಿ 68 ಜಾನುವಾರುಗಳಲ್ಲಿ ಗರ್ಭಪಾತ ಮತ್ತು 18 ಜಾನುವಾರುಗಳಲ್ಲಿ ಮರಣ ಸಂಭವಿಸಿರುತ್ತದೆ. ಸಂಬಂಧಿಸಿದ ಎಲ್ಲಾ ದಾಖಲಾತಿಗಳನ್ನು **ಅನುಬಂಧ–1** ರಲ್ಲಿ ನೀಡಲಾಗಿದೆ. |
| ಆ | ಹಾಗಿದ್ದಲ್ಲಿ, ಕಳೆದ ಮೂರು ವರ್ಷಗಳಿಂದ ಜಾನುವಾರುಗಳ ಕಾಯಿಲೆಗೆ ಸಂಬಂಧಿಸಿದಂತೆ ಲಸಿಕೆಗಳನ್ನು ಸರಬರಾಜು ಮಾಡಿದ ಕಂಪನಿ ಯಾವುದು: (ವಿವರ ನೀಡುವುದು) | 2018-19 ಮತ್ತು 2019-20 ರಲ್ಲಿ ನಡೆಸಲಾದ 14 ರಿಂದ 16 ನೇ ಸುತ್ತುಗಳ ಕಾಲು ಬಾಯಿ ರೋಗ ಲಸಿಕಾ ಕಾರ್ಯಕ್ರಮಕ್ಕೆ ಮೆ. ಬಯೋವೆಟ್ ಪ್ರೈವೇಟ್ ಲಿಮಿಟೆಡ್, ಮಾಲೂರು, ಕೋಲಾರ ಜಿಲ್ಲೆ ರವರು ಹಾಗೂ 2020-21ನೇ ಸಾಲಿಗೆ ಕೇಂದ್ರ ಸರ್ಕಾರದ ಮುಖಾಂತರ ಮೆ. ಇಂಡಿಯನ್ ಇಮ್ಯುನಾಲಾಜಿಕಲ್ಸ್, ಹೈದರಾಬಾದ್ ಸಂಸ್ಥೆಯಿಂದ ಕಾಲು ಬಾಯಿ ರೋಗ ಲಸಿಕೆಯನ್ನು ಸರಬರಾಜು ಮಾಡಿರುತ್ತಾರೆ.<br>ಸದರಿ ಸುತ್ತುಗಳಿಗೆ ಸರಬರಾಜಾದ ಕಾಲು ಬಾಯಿ ರೋಗ ಲಸಿಕಾ ವಿವರಗಳು ಈ ಕೆಳಕಂಡಂತಿವೆ. |

| ಕ್ರ.ಸಂ | ವರ್ಷ | ಸುತ್ತು | ಕಾಲು ಬಾಯಿ ಲಸಿಕೆ ಸರಬರಾಜು ವಿವರಗಳು (ಡೋಸ್ ಲಕ್ಷಗಳಲ್ಲಿ) |
|---|---|---|---|
| 1. | 2018-19 | 14 | 105.00 |
| | | 15 | 110.00 |

<table>
<tr><td></td><td></td><td>
<table>
<tr><td>2.</td><td>2019-20</td><td>16</td><td>110.00</td></tr>
<tr><td>3.</td><td>2020-21 (NADCP)</td><td>1ನೇ ಸುತ್ತು</td><td>115.06 ಕೇಂದ್ರ ಸರ್ಕಾರದಿಂದ ಸರಬರಾಜಾಗಿರುತ್ತದೆ.</td></tr>
<tr><td colspan="3">ಒಟ್ಟು ಸರಬರಾಜಾದ ಲಸಿಕೆ</td><td>440.06 ಲಕ್ಷ ಡೋಸ್ ಗಳು</td></tr>
</table>
</td></tr>
<tr><td>ಇ</td><td>ಸದರಿ ಲಸಿಕೆಗಳ ಸರಬರಾಜು ಸಂಬಂಧ ಕಂಪನಿಯವರಿಗೆ ಪಾವತಿ ಮಾಡಿರುವ ಮೊತ್ತವೆಷ್ಟು: (ವಿವರ ನೀಡುವುದು)</td><td>ಲಸಿಕೆಗಳ ಸರಬರಾಜಿಗಾಗಿ 2018-19 ಮತ್ತು 2019-20 ನೇ ಸಾಲಿನಲ್ಲಿ ಒಟ್ಟು ರೂ.3529.65 ಲಕ್ಷಗಳನ್ನು ಪಾವತಿಸಿದ್ದು, ವಿವರಗಳು ಈ ಕೆಳಕಂಡಂತಿದೆ.
<table>
<tr><th>ಕ್ರಸಂ</th><th>ಲಸಿಕೆ ಪ್ರಮಾಣ</th><th>ದರ</th><th>ಕಾಲು ಬಾಯಿ ಲಸಿಕೆ ಸರಬರಾಜಿಗೆ ಪಾವತಿಸಿದ ಮೊತ್ತ (ರೂಗಳಲ್ಲಿ)</th></tr>
<tr><td>1.</td><td>105.00</td><td>8.19</td><td>85995000</td></tr>
<tr><td></td><td>110.00</td><td>8.55</td><td>94050000</td></tr>
<tr><td>2.</td><td>110.00</td><td>15.72</td><td>172920000</td></tr>
<tr><td>3.</td><td>115.06</td><td colspan="2">ಕೇಂದ್ರ ಸರ್ಕಾರದಿಂದ ಪಾವತಿಸಲಾಗಿರುತ್ತದೆ</td></tr>
</table>
</td></tr>
<tr><td>ಈ</td><td>ನಕಲು ಲಸಿಕೆಗಳನ್ನು ಸರಬರಾಜು ಮಾಡಿದ ಕಂಪನಿ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು:</td><td>2020-21ನೇ ಸಾಲಿನಲ್ಲಿ ಮೊದಲನೇ ಸುತ್ತಿನ ಕಾಲು ಬಾಯಿ ಲಸಿಕಾ ಕಾರ್ಯಕ್ರಮದ ಅನುಷ್ಠಾನಕ್ಕೆ ಕೇಂದ್ರ ಸರ್ಕಾರವು ಕಾರ್ಯಕ್ರಮದ (Program Logistic Agency (PLA) ಆದ ನಾಫೆಡ್ (NAFED) ಮುಖಾಂತರ ಮೆ. ಇಂಡಿಯನ್ ಇಮ್ಯುನೋಲಾಜಿಕಲ್ಸ್, ಹೈದರಾಬಾದ್ ಸಂಸ್ಥೆಯಿಂದ ಕಾಲು ಬಾಯಿ ರೋಗ ಲಸಿಕೆಯನ್ನು ಸರಬರಾಜು ಮಾಡಿದ್ದು, ಸರಬರಾಜಾದ ಲಸಿಕೆಯು ಲಸಿಕಾ ಗುಣಮಟ್ಟ ಪರೀಕ್ಷೆಯಲ್ಲಿ ಪೂರಕ ಗುಣಮಟ್ಟವನ್ನು ಹೊಂದಿಲ್ಲವೆಂದು (Sub Standard Vaccine) ಕೇಂದ್ರ ಸರ್ಕಾರವು ತಿಳಿಸಿದ್ದು, ಇದರ ಬಗ್ಗೆ ಕೇಂದ್ರ ಸರ್ಕಾರದ ಮಟ್ಟದಲ್ಲಿ ಕ್ರಮಕೈಗೊಳ್ಳಬಹುದಾಗಿದೆ.</td></tr>
</table>

**ಪಸಂಮೀ ಇ-96 ಸಲೆವಿ 2021**

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ ಸಚಿವರು

## ಅನುಬಂಧ-1

**1 ನೇ ಸುತ್ತಿನ ಕಾಲುಬಾಯಿ ರೋಗ ಲಸಿಕಾ ಕಾರ್ಯಕ್ರಮದ ಸಂಧರ್ಭದಲ್ಲಿ ಲಸಿಕಾ ವ್ಯತಿರಿಕ್ತ ಪರಿಣಾಮದಿಂದ ಮರಣಿಸಿದ / ಗರ್ಭಪಾತ ಹೊಂದಿದ ಜಾನುವಾರುಗಳ ವಿವರ**

**ದಿ:02-10-2021 ರಿಂದ 21-12-2021**

| ಕ್ರಸಂ | ಜಿಲ್ಲೆಗಳು | ಒಟ್ಟು ಲಸಿಕಾ ವ್ಯತಿರಿಕ್ತ ಪರಿಣಾಮಗಳು | ಚಿಕಿತ್ಸೆಗೆ ಸ್ಪಂದಿಸಿ ಗುಣಮುಖವಾದ ಜಾನುವಾರುಗಳು | ಗರ್ಭಪಾತ | ಮರಣ ಹೊಂದಿದ ಜಾನುವಾರುಗಳು |
|---|---|---|---|---|---|
| 1 | ದಾವಣಗೆರೆ | 8 | 7 | 1 | 0 |
| 2 | ಕೋಲಾರ | 6 | 4 | 1 | 1 |
| 3 | ಮಂಡ್ಯ | 11 | 2 | 9 | 0 |
| 4 | ರಾಮನಗರ | 27 | 0 | 26 | 1 |
| 5 | ಬೆಂಗಳೂರು ನಗರ | 2 | 0 | 0 | 2 |
| 6 | ಚಾಮರಾಜನಗರ | 2 | 0 | 0 | 2 |
| 7 | ತುಮಕೂರು | 11 | 5 | 3 | 3 |
| 8 | ಬಳ್ಳಾರಿ | 1 | 0 | 0 | 1 |
| 9 | ಬೆಂಗಳೂರು ಗ್ರಾಮಾಂತರ | 25 | 3 | 22 | 0 |
| 10 | ಚಿಕ್ಕಬಳ್ಳಾಪುರ | 4 | 0 | 4 | 0 |
| 11 | ಮೈಸೂರು | 8 | 1 | 1 | 6 |
| 12 | ಚಿತ್ರದುರ್ಗ | 2 | 0 | 1 | 1 |
| 13 | ಶಿವಮೊಗ್ಗ | 1 | 0 | 0 | 1 |
| | **ಒಟ್ಟು** | **108** | **22** | **68** | **18** |